# ಶ್ರೀ ಶ್ರೀ ರಘೂತ್ತಮ ತೀರ್ಥರು

—o—

ರಚನೆ :

ಜಿ. ಹೆಚ್. ಬಿ. ಆಚಾರ್ಯ

ಬೆಂಗಳೂರು

ಪ್ರಕಾಶಕರು :

ಶ್ರೀ H. ಹನುಮಂತಾಚಾರ್ಯರು

16, ಸಿಂಗರಾಚಾರ್ ಸ್ಟ್ರೀಟ್

ಟ್ರಿಪ್ಲಿಕೇನ್ - ಮದರಾಸು-5

# ಶ್ರೀಶ್ರೀರಘೂತ್ತಮ ತೀರ್ಥರು

—೦—

ರಚನೆ :

**ಜೆ. ಹೆಚ್. ಬಿ. ಆಚಾರ್ಯರ್**

ಬೆಂಗಳೂರು

ಪ್ರಕಾಶಕರು :

**ಶ್ರೀ H. ಹನುಮಂತಾಚಾರ್ಯರು**

16, ಸಿಂಗರಾಚಾರ್ ಸ್ಟ್ರೀಟ್

ಟ್ರಿಪ್ಲಿಕೇನ್ - ಮದರಾಸು-5

# ವಿಜ್ಞಾಪನೆ

ಶ್ರೀಮದುತ್ತರಾದಿ ಮಠವು, ಮಠತ್ರಯಗಳಲ್ಲಿ, ಆರ್ಥಿಕವಾಗಿ ಸುಭದ್ರ ವಾಗಿದೆ ! ಏತನ್ಮಠದ ಯತಿಚಂದ್ರಮರಲ್ಲಿ ಘನವಿದ್ವಾಂಸರು. ತಪೋಧನರು, ಮಹಾತ್ಮರೂ ಆದ ಶ್ರೀ ರಘೂತ್ತಮ ತೀರ್ಥರು ಗಣ್ಯವ್ಯಕ್ತಿಗಳು !

ನಮ್ಮ ಅಣ್ಣನವರಾದ ಶ್ರೀ ಹನುಮಂತಾಚಾರ್ಯರು, ಹಲವಾರು ಕೃತಿಗಳಿಗೆ ಪ್ರಕಾಶಕರಾಗಿರುವುದಲ್ಲದೇ ಅನೇಕ ಕೃತಿಗಳ ಮುದ್ರಣಕ್ಕೆ ದ್ರವ್ಯ ಸಹಾಯ ಮಾಡಿರುತ್ತಾರೆ ! ಗುರುಕೃಪೆಗೆ ಪಾತ್ರರಾಗಿರುತ್ತಾರೆ ! ಶ್ರೀ ಮದ್ರಘೂತ್ತಮ ತೀರ್ಥರ ಸ್ತೋತ್ರರಾಜವನ್ನು ಕನ್ನಡ, ಸಂಸ್ಕೃತ ಲಿಪಿಗಳಲ್ಲಿ ಮುದ್ರಿಸಿ, ಉಚಿತವಾಗಿ ಹಂಚುವ ಏರ್ಪಾಟು ಮಾಡಿರುತ್ತಾರೆ ! ಈ ಕೃತಿಗೂ ಪ್ರಕಾಶಕರಾಗಿದ್ದಾರೆ ! ಶ್ರೀ ರಘೂತ್ತಮರು ಪ್ರಕಾಶಕರಿಗೆ ಆಯುರಾರೋಗ್ಯ ಭಾಗ್ಯಗಳನ್ನನುಗ್ರಹಿಸಿ ಸಂರಕ್ಷಿಸಲಿ ಎಂಬುದಾಗಿ ಪ್ರಾರ್ಥಿಸುತ್ತೇನೆ !

ಗೌರೀಬಿದನೂರು
29-12-71

ವಿದ್ವಜ್ಜನ ವಿಧೇಯ
**ಜೆ. ಹೆಚ್. ಬಿ. ಆಚಾರ್ಯ**

# ಶ್ರೀ ಶ್ರೀ ರಘೂತ್ತಮ ತೀರ್ಥರು

—೦—

ಶ್ರೀ ಪಂಢರಾಪುರ ಶ್ರೀ ವಿಠಲಾಚಾರ್ಯ
ವಂಶವರ್ಧನ ನೀನು ! ವರದ ನೀನು !
ಪರಮ ಸಾಧ್ವೀಮಣಿ ಶ್ರೀ ರುಕ್ಮಿಣೀ ಮಣಿ
ಸತ್ಪುತ್ರಮಣಿನೀನು ! ಸಾಧು ನೀನು !
ರಘುವರ್ಯ ವರಪುತ್ರ ರಘುವರ್ಯ ವರಭಕ್ತ
ಶ್ರೀ ರಘೂತ್ತಮ ನೀನು ! ಧೀರ ನೀನು !
ಶ್ರೀ ಭಾವಬೋಧಗಳ್ ವಿರಚಿಸಿ ಮೆರೆದಂಥ
ಆರ್ಯನೀಂ ಭಾವಬೋಧಾರ್ಯ ನೀನು !

ಸಾರ್ಥಕಾಖ್ಯದ ರಾಮಚಂದ್ರಾರ್ಯ ನೀನು !
ಮಾಧ್ವಪೀಠದಿ ಮೆರೆದ ಬಲ್ಮಾನ್ಯ ನೀನು !
ನಿರುತ ತಿರುಕೋಯಿಲೂರಲಿ ಮೆರೆವ ದೊರೆಯೆ !
ಶ್ರೀ ರಘೂತ್ತಮ ಗುರುವರಾ ! ಶಿರವ ಬಾಗಿ
ಕರವ ಮುಗಿಯುವೆ ಕಾಪಾಡು ಪರಮಹಂಸ !

—ಭೀಮಕವಿ

ಶ್ರೀಮದ್ಧನುಮದ್ಭೀಮ ಮಧ್ವಾಂತರ್ಗತ
ರಾಮಕೃಷ್ಣ ವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ

ಶ್ರೀ ಗುರುಭ್ಯೋನಮಃ

# ಶ್ರೀ ರಘೂತ್ತಮ ತೀರ್ಥರು

ಮೂಕೋಪಿ ಯತ್ಪ್ರಸಾದೇನ
ಮುಕುಂದ ಶಯನಾಯತೇ
ರಾಜ ರಾಜಾಯತೇ ರಿಕ್ತೋ
ರಾಘವೇಂದ್ರಂ ತಮಾಶ್ರಯೇ

ಶ್ರೀಮದಾನಂದ ತೀರ್ಥ ಭಗವತ್ಪಾದಾಚಾರ್ಯರು, ಆಸೇತು ಶೀತನಗ ಪರ್ಯಂತ ಸಂಚಾರ ಮಾಡಿ, ಸಮಸ್ತ ಇತರ ಮತಗಳನ್ನು ಖಂಡನಮಾಡಿ, ದ್ವೈತ ಮತವನ್ನು ಪುನರುತ್ಥಾನ ಮಾಡಿ, ವಿಜಯ ದುಂದುಭಿಯನ್ನು ಮೊಳಗಿಸಿದ ಮಹಾತ್ಮರು. ದ್ವೈತ ಮತವನ್ನು ಸಂಸ್ಥಾಪಿಸಿದ ಮೂಲ ಪುರುಷರು. ಶ್ರೀಮದಾಚಾರ್ಯರು, ಶಿಷ್ಯರತ್ನರಿಗೆ ಆಶ್ರಮವನ್ನಿತ್ತು,

**ಶ್ರೀ ಪದ್ಮನಾಭ ತೀರ್ಥರು**
**ಶ್ರೀ ನರಹರಿ ತೀರ್ಥರು**
**ಶ್ರೀ ಮಾಧವ ತೀರ್ಥರು**
**ಶ್ರೀ ಅಕ್ಷೋಭ್ಯ ತೀರ್ಥರು**

ಎಂಬ ನಾಮಧೇಯಗಳನ್ನಿತ್ತು ಅನುಗ್ರಹಿಸಿದರು. ಶ್ರೀ ಮದಕ್ಷೋಭ್ಯರ ಶಿಷ್ಯರತ್ನರಾದ **ಶ್ರೀ ಮಜ್ಜಯತೀರ್ಥರು** ದ್ವೈತ ವೇದಾಂತಕ್ಕೆ ಅಸ

ದೃಶವಾದ ಸೇವೆ ಸಲ್ಲಿಸಿ, ಟೀಕಾಕೃತ್ಪಾದರೆಂಬ ಬಿರುದನ್ನು ಪಡೆದಿರುತ್ತಾರೆ. ಆ ಮಹನೀಯರ ಬೃಹತ್ಪೀಠದಲ್ಲಿ ಬಂದ ಯತಿಚಂದ್ರಮರಲ್ಲಿ **ಶ್ರೀ ವಿದ್ಯಾ ನಿಧಿ ತೀರ್ಥರು,** ಶ್ರೀಮದುತ್ತರಾದಿ ಮಠದ ಮೂಲಪುರುಷರು.

ಅದು **ಶ್ರೀ ರಘುವರ್ಯ ತೀರ್ಥರ** ಕಾಲ. ಅವರ ಪೂರ್ವಾಶ್ರಮದ ಸೋದರೀ ಮಣಿ, ಸಾಧ್ವೀ ಮಣಿಯಾದ **ರುಕ್ಮಿಣೀ ಬಾಯಿಯು** ಪತಿ ದೇವನಾದ ಪಂಢರಾಪುರದ **ವಿಠಲಾಚಾರ್ಯರ** ಸೇವೆಯನ್ನು ಮಾಡಿಕೊಂಡು ಶ್ರೀ ಮಠದಲ್ಲಿಯೇ ಇರುತ್ತಿದ್ದರು. ಈ ಪುಣ್ಯ ದಂಪತಿಗಳ ಸತ್ಪುತ್ರನಾದ **ರಾಮಚಂದ್ರಾಚಾರ್ಯನೇ** ಕಥಾನಾಯಕರಾದ **ಶ್ರೀ ರಘೂತ್ತಮ ತೀರ್ಥರು.**

ರಾಮಚಂದ್ರನ ವ್ಯಾಸಂಗವು ಶ್ರೀ ರಘುವರ್ಯರಲ್ಲಿಯೇ ನಡೆಯಿತು. ಗುರುಗಳಿಗೆ ದೇಹಾಲಸ್ಯವಾಯಿತು. ಶ್ರೀ ಹರೀಚ್ಛೆಯಂತೆ ರಘುವರ್ಯರು ರಾಮಚಂದ್ರಾಚಾರ್ಯರಿಗೆ ತುರ್ಯಾಶ್ರಮವನ್ನಿತ್ತು **ರಘೂತ್ತಮತೀರ್ಥ**ರೆಂಬ ಅಭಿದಾನವನ್ನಿತ್ತು ಅವರ ಮೇಲೆ ತಮ್ಮ ಅಭಯ ಹಸ್ತವನ್ನಿಟ್ಟು ಆಶೀರ್ವದಿಸಿ ಅನುಗ್ರಹಿಸಿದರು.

ರಘುವರ್ಯತೀರ್ಥರ ಗುರುಗಳಾದ ಶ್ರೀ ರಘುನಾಥತೀರ್ಥರ ಶಿಷ್ಯರಲ್ಲಿ ಪ್ರಮುಖರು, ಘನವಿದ್ವಾಂಸರೂ ಆದ **ಆದ್ಯವರದರಾಜಾಚಾರ್ಯ**ರನ್ನು ರಘೂತ್ತಮರಿಗೆ ಸರ್ವಜ್ಞ ಶಾಸ್ತ್ರ ಪಾಠ ಹೇಳಲು ಏರ್ಪಾಡು ಮಾಡಿದರು ಶ್ರೀ ರಘುವರ್ಯರು. ಸೂತ್ರಭಾಷ್ಯದವರಿಗೂ ವ್ಯಾಸಂಗವನ್ನು ಮಾಡಿ ಕೊಂಡಿದ್ದ ರಘೂತ್ತಮರು ಗುರುಗಳ ಅಪ್ಪಣೆಯಂತೆ ವರದರಾಜಾಚಾರ್ಯರಲ್ಲಿಯೇ ವ್ಯಾಸಂಗವನ್ನು ಮುಂದುವರಿಸಿದರು. ರಘುವರ್ಯರಿಗೆ ದೇಹಾಲಸ್ಯವಾಯಿತು. ಪಾರ್ಥಿವ ದೇಹವನ್ನು ತೊರೆದರು. ವಿಶಿಥಿಲ ವಿಜಂiನಗರ ಸಾಮ್ರಾಜ್ಯವಾದ ಹಂಪೆಯಲ್ಲಿ ಶ್ರೀ ನವ ಬೃಂದಾವನದಲ್ಲಿ ಬೃಂದಾವನವಸ್ಥರಾದರು.

ರಘೂತ್ತಮರಿಗೆ ಆದ್ಯಾಚಾರ್ಯರು ಕೆಲಕಾಲ ಶ್ರೀಮಠದಲ್ಲಿಯೇ ಪಾಠ ಹೇಳಿದರು. ಅನಂತರ ಕಾರಣಾಂತರದಿಂದ ಪಾಠಕ್ಕೆ ತಮ್ಮಲ್ಲಿಗೆ ಬರ ಹೇಳಿದರು. ಶ್ರೀಗಳವರು ಗತ್ಯಂತರವಿಲ್ಲದೆ ಹಾಗೆಯೇ ಮಾಡಿದರು. ಹೀಗಿರಲು ಸಂಚಾರದಲ್ಲಿ ಸಂಸ್ಥಾನವು ಆನೆಗೊಂದಿಗೆ ಬಂದಿತು. ಓರ್ವ ಶ್ರೀಮಂತನ ಮನೆಯಲ್ಲಿ ಶ್ರೀಗಳಿಗೆ ದ್ವಾದಶಿಯ ದಿವಸ ಭಿಕ್ಷದ ಏರ್ಪಾಡಾಯಿತು. ಅಂದು ಶ್ರೀಗಳವರು ಪೂಜಾದಿಗಳನ್ನು ಮುಗಿಸಿಕೊಂಡು ಬರುವುದು ಆಲಸ್ಯವಾಯಿತು ! ಕಾರಣಾಂತರದಿಂದ ವರದರಾಜಾಚಾರ್ಯರು, ಗೃಹಸ್ಥರೂ ತೀರ್ಥವನ್ನು ತೆಗೆದುಕೊಂಡು ಪಾರಣೆಗೆ ಕುಳಿತರು. ಅನಂತರದಲ್ಲಿ ಬಂದ ಶ್ರೀ ರಘೂತ್ತಮರು ಆ ದೃಶ್ಯವನ್ನು ಕಂಡು ತುಂಬಾ ಬೇಸರಪಟ್ಟರು. ಆದರೂ ಅಂದು ಭಿಕ್ಷೆಯನ್ನು ಆ ಮನೆಯಲ್ಲಿಯೇ ಸ್ವೀಕರಿಸಬೇಕಾಯಿತು ! ತಮಗೆ ಸಾಕಷ್ಟು ಪಾಂಡಿತ್ಯವಿಲ್ಲದಿರುವಿಕೆಯೇ ಅನಾದರಣೆಗೆ, ತಾತ್ಸಾರ ಬುದ್ಧಿಗೆ ಮುಖ್ಯ ಕಾರಣವೆಂದು ಚಿಂತಿಸಿ ಸರ್ವಜ್ಞಾಚಾರ್ಯರ ಮಹಾಪೀಠದಲ್ಲಿ ವಿರಾಜಮಾನರಾದರೂ ತಾವು ಸಂಕಟಕ್ಕೀಡಾದೆವೆಂದು, ಮನನೊಂದು ಗುರುಗಳಾದ ಶ್ರೀ ರಘುವರ್ಯರ ಬೃಂದಾವನದ ಮುಂದೆ ಕುಳಿತು ತಮ್ಮ ವೇದನೆಯನ್ನು ಗುರುಗಳಿಗೆ ನಿವೇದನೆ ಮಾಡಿಕೊಂಡರು. ರಘುವರ್ಯರು ರಘೂತ್ತಮರಿಗೆ ದರ್ಶನವಿತ್ತು

**"ಚಿಂತಿಸಬೇಕಾಗಿಲ್ಲ ! ಇಂದಿನಿಂದ ನಿಮಗೆ ನಾವೇ ಪಾಠ ಹೇಳುವೆವು. ಯಾರಲ್ಲಿಗೂ ಪಾಠಕ್ಕೆ ಹೋಗಬೇಕಾಗಿಲ್ಲ. ಶಿಷ್ಯರಿಗೆ ಶ್ರೀ ಸುಧಾಪಾಠವನ್ನು ಹೇಳಲು ನೀವು ಸಮರ್ಥರಿದ್ದೀರಿ. ಆ ಶಕ್ತಿಯನ್ನು ನಾವು ನಿಮಗೆ ಅನುಗ್ರಹಿಸಿದ್ದೇವೆ. ನಾವು ನಿಮ್ಮ ಯೋಗ್ಯತೆಯನ್ನು ಅರಿತೇ ಆಶ್ರಮವನಿತ್ತಿರುತ್ತೇವೆ ! "**

ಎಂಬುದಾಗಿ ಅಪ್ಪಣೆಯಿತ್ತರು. ಮರುದಿನದಿಂದ ಶ್ರೀ ರಘೂತ್ತಮರು ಆದ್ಯಾಚಾರ್ಯರಲ್ಲಿಗೆ ಪಾಠಕ್ಕೆ ಹೋಗಲಿಲ್ಲ. ಶ್ರೀ ಮಠದಲ್ಲಿ ತಾವೇ ಶ್ರೀ ಸುಧಾ ಪಾಠವನ್ನು ಹೇಳಲು ಪ್ರಾರಂಭಮಾಡಿದರು. ಮಠದಲ್ಲಿದ್ದವರಿಗೆ, ಶಿಷ್ಯರಿಗೂ ಆಶ್ಚರ್ಯವೆನಿಸಿತು ! ಪಾಂಡಿತ್ಯವಿಲ್ಲದಿರುವ ಶ್ರೀಗಳು ಘನವಿದ್ವಾಂಸ

ರಂತೆ ಸುಧಾನುವಾದ ಮಾಡುವುದು ಪಂಡಿತರ ಕಿವಿಗೆ ಬಿದ್ದಿತು. ಆದ್ಯಾಚಾರ್ಯರಿಗೂ ತಿಳಿಯಿತು! ಆದರೆ ಅವರದನ್ನು ನಂಬಲಿಲ್ಲ. ಶ್ರೀಗಳು ತಮ್ಮ ಬಳಿಗೆ ಪಾಠಕ್ಕೆ ಬಾರದೇ ನಿಂತಿದ್ದು ಅವರಿಗೂ ಮನಃಕ್ಲೇಶವನ್ನುಂಟು ಮಾಡಿತು!

ಒಂದು ದಿನ ಆದ್ಯಾಚಾರ್ಯರು ಪ್ರಾತಃ ಕಾಲಕ್ಕೆ ಶ್ರೀ ಮಠಕ್ಕೆ ಬಂದರು. ಶ್ರೀ ರಘೂತ್ತಮರ ಸುಧಾನುವಾದವು ನಡೆದಿತ್ತು. ಶಿಷ್ಯರು ಪಾಠದಲ್ಲಿ ಮಗ್ನರಾಗಿದ್ದರು! ಆಚಾರ್ಯರು ಮರೆಯಾಗಿ ನಿಂತು ಪ್ರವಚನವನ್ನು ಕೇಳಿದರು. ತಮಗೆ ಸಂದಿಗ್ಧವಾದ ವಿಷಯಭಾಗವನ್ನು ರಘೂತ್ತಮರು, ಸರಳವಾಗಿ, ವ್ಯಾಖ್ಯಾನ ಮಾಡಿದ್ದು ಕೇಳಿ ಆಶ್ಚರ್ಯಾನಂದ ಭರಿತರಾಗಿ ತಮ್ಮ ತಪ್ಪನ್ನು ತಿಳಿದು, ಪಶ್ಚಾತ್ತಾಪಪಟ್ಟು ಶ್ರೀಗಳವರ ದರ್ಶನ ಪಡೆದು ಸಾಷ್ಟಾಂಗ ಪ್ರಣಾಮ ಮಾಡಿ, ಅಪರಾಧವನ್ನು ಕ್ಷಮಿಸಬೇಕೆಂದು ಕೇಳಿಕೊಂಡರು.

ನಿಗ್ರಹಾನುಗ್ರಹ ಶಕ್ತರೂ, ಶಾಂತ್ಯಾದಿ ಸುಗುಣ ಶೋಭಿತರೂ ಆದ ರಘೂತ್ತಮರು, ಆದ್ಯಾಚಾರ್ಯರನ್ನು ಸಾದರದಿಂದ ಸಂತೈಸಿ, ಯಾವ ಅಪರಾಧವೂಯಿಲ್ಲ, ಯಾರ ಅಪಚಾರವೂ ಇಲ್ಲವೆಂದು, ಸಮಾಧಾನ ವಚನಗಳನ್ನಾಡಿ, ತಮ್ಮ ವಿಶಾಲ ಮನೋಭಾವನೆಯನ್ನು ವ್ಯಕ್ತಪಡಿಸಿದರು.

## ಭಾವ ಬೋಧಕಾರರು

ಶ್ರೀ ರಘೂತ್ತಮರು ಆನೆಗೊಂದಿಯಿಂದ ಹೊರಟು ಸಂಚಾರ ಮಾಡುತ್ತಾ ಶ್ರೀರಂಗ ಕ್ಷೇತ್ರಕ್ಕೆ ದಯಮಾಡಿಸಿದರು. ಅಲ್ಲಿರುವಾಗ ಶ್ರೀಗಳು ಶ್ರೀ ಸರ್ವಜ್ಞ ಶಾಸ್ತ್ರ ಪಾಠಪ್ರವಚನದಲ್ಲಿ ಹೆಚ್ಚು ಕಾಲ ಕಳೆದರು. ಸರ್ವಜ್ಞರ ಶಾಸ್ತ್ರಕ್ಕೆ ಟಿಪ್ಪಣಿಗಳನ್ನು ರಚಿಸಿದರು.

ಅವರ ಕೃತಿಗಳು

1) ತತ್ವ ಪ್ರಕಾಶಿಕಾ ಭಾವ ಬೋಧ
2) ಪ್ರಮೇಯ ದೀಪಿಕಾ ಭಾವಬೋಧ

3) ನ್ಯಾಯ ವಿವರಣ ಭಾವಬೋಧ
4) ತತ್ವ ನಿರ್ಣಯ ಟೀಕಾ ಭಾವ ಬೋಧ
5) ಬೃಹದಾರಣ್ಯ ಟೀಕಾ ಭಾವಬೋಧ
6) ಐತರೇಯ ಭಾವಬೋಧ

ಶ್ರೀ ರಘೂತ್ತಮರು ಭಾವಬೋಧಗಳನ್ನು ರಚಿಸಿದರು. **ಭಾವ ಬೋಧಕಾ**ರರೆಂಬ ಬಿರುದನ್ನು ಪಡೆದರು. ಸಾಮಾನ್ಯವಾಗಿ ಘನವಿದ್ವಾಂಸ ರಿಗೆ ಪರಮಹಂಸಾಶ್ರಮವನ್ನು ಕೊಡುವುದು ನಡೆದು ಬಂದಿದೆ. ಆದರೂ ಕಥಾನಾಯಕರಾದ ರಘೂತ್ತಮರು ಪಾಂಡಿತ್ಯವಿಲ್ಲದಿರುವಾಗ ಆಶ್ರಮವನ್ನು ಸ್ವೀಕರಿಸಿದರು. ಗುರ್ವನುಗ್ರಹದಿಂದ ಶ್ರೀ ಸುಧಾಪಾಠವನ್ನು ಹೇಳಿದರು. ಪಂಡಿತರಿಗೂ ಸಾಧ್ಯವಾಗದಂಥಾ ಕಾವ್ಯರಚನೆ ಮಾಡಿದರು. ಸರ್ವಜ್ಞರ ಪ್ರೀತಿಗೆ ಪಾತ್ರರಾದರು ಇದು ಶ್ರೀ ರಘೂತ್ತಮ ತೀರ್ಥರಲ್ಲಿ ಕಂಡು ಬರುವ ಮಹತ್ವದ ವೈಶಿಷ್ಟ್ಯ. ಗುರುಸ್ಥಾನದಲ್ಲಿದ್ದ ಆದ್ಯಾಚಾರ್ಯರಿಗೆ ವಿಸ್ಮಯಗೊಳಿಸಿ ಅವರಿಂದಲೇ ಮಾನ್ಯತೆಯನ್ನು ಪಡೆದ ಶ್ರೀ ರಘೂತ್ತಮರು, ಸರ್ವಸಜ್ಜನರಿಗೂ ಮಾನ್ಯರೆಂದು ಹೇಳುವುದು ಸೂಕ್ತವೂ, ನಿರ್ವಿವಾದಾಂಶವೆಂಬುದು ಸರಿಯಷ್ಟೆ !

ಶ್ರೀ ರಘೂತ್ತಮ ತೀರ್ಥರು ಸುಧಾದಿ ಸಚ್ಛಾಸ್ತ್ರ ಪ್ರವಚನದಲ್ಲಿ ನಿರತ ರಾದರು. ಕಾವ್ಯರಚನೆ ಮಾಡಿದರು. ಕಾಲಕಾಲಕ್ಕೆ ವಿದ್ವತ್ಸಭೆಗಳನ್ನು ನಡೆಸಿ, ಪಂಡಿತರನ್ನು ಸತ್ಕರಿಸಿ ವಿದ್ವಜ್ಜನ ಪಕ್ಷಪಾತಿಗಳಾದರು. ಪಾಂಡಿತ್ಯ ಪೂರ್ಣವಾದ ಗಂಭೀರೋಪನ್ಯಾಸಗಳನ್ನು ಮಾಡಿದರು. ಪಾಂಡಿತ್ಯ ಪ್ರತಿಭಾ ವಿಶೇಷದಿಂದ ವಿರಾಜಮಾನರಾದ ಶ್ರೀ ರಘೂತ್ತಮರು, ರಾಜಮರ್ಯಾದೆಯನ್ನು ಪಡೆದು, ರಾಜವೈಭವವನ್ನನುಭವಿಸಿದರು.

## ಬೃಂದಾವನ ಪ್ರವೇಶ

ಶ್ರೀ ರಘೂತ್ತಮರಲ್ಲಿ ವ್ಯಾಸಂಗಕ್ಕೆ ಅನೇಕ ಶಿಷ್ಯರು ಬಂದು ಸೇರಿದರು. ಅವರಲ್ಲಿ ಪಿಲ್ಲೂರು ಕೋನೇರಿ ಭಟ್ಟರ ಪುತ್ರರಾದ **ವ್ಯಾಸಾಚಾರ್ಯ**ರು ಗುರು

ಗಳ ಪ್ರೀತಿಗೆ ಪಾತ್ರರಾದರು. ಸಂಚಾರದಲ್ಲಿ ಗುರುಗಳು ತಿರುಕೋಯಿಲೂರಿಗೆ ಬಂದರು. ಅಲ್ಲಿ ಶ್ರೀಗಳಿಗೆ ದೇಹಾಲಸ್ಯವಾಯಿತು. ಪ್ರೀತಿಯ ಶಿಷ್ಯರಾದ ವ್ಯಾಸಾಚಾರ್ಯರಿಗೆ ತುರ್ಯಾಶ್ರಮವನ್ನಿತ್ತು **ವೇದವ್ಯಾಸ ತೀರ್ಥ**ರೆಂಬ ಅಭಿದಾನವನ್ನಿತ್ತು ಆಶೀರ್ವದಿಸಿದರು. ಶ್ರೀ ರಘೂತ್ತಮ ತೀರ್ಥರು **31** ವರ್ಷಗಳ ಕಾಲ ದ್ವೈತವೇದಾಂತ ಸಾಮ್ರಾಜ್ಯವನ್ನಾಳಿದರು. ದಕ್ಷಿಣ ಪಿನಾಕೀ ನದೀ ತೀರದಲ್ಲಿರುವ ತಿರುಕ್ಕೋಯಿಲೂರಲ್ಲಿ ಶ್ರೀ ಮನ್ಮಥ ನಾಮ ಸಂವತ್ಸರ ಪುಷ್ಯ ಶುದ್ಧ ಏಕಾದಶಿಯ ದಿನ ಬೃಂದಾವನ ಪ್ರವೇಶ ಮಾಡಿದರು. ಇಂದಿಗೆ 376 ವರ್ಷಗಳಾದವು.

## ಮಹಿಮೆಗಳು

ಶ್ರೀ ರಘೂತ್ತಮರು ದೇವಾಂಶ ಸಂಭೂತರಾದ ಮಹಾತಪಸ್ವಿಗಳು-ಭಕ್ತಜನ ಕಲ್ಪವೃಕ್ಷ, ಕಾಮಧೇನು, ಚಿಂತಾಮಣಿಯಾಗಿದ್ದಾರೆ !

ಓರ್ವ ಭಕ್ತನಿಗೆ ನಾಲಿಗೆಯು ಸೀಳಿದಾಗ ಶ್ರೀ ರಘೂತ್ತಮರ ಬೃಂದಾವನ ಸನ್ನಿಧಿಯಲ್ಲಿ ಭಕ್ತಿ ಪೂರ್ವಕ ಸೇವೆಮಾಡಿ ಗುರುಕೃಪೆಗೆ ಪಾತ್ರನಾದನು. ಸ್ವಪ್ನದಲ್ಲಿ ಗುರುಗಳು ದರ್ಶನವಿತ್ತು ನಾಲಿಗೆಯನ್ನು ಹೊಲಿದಿರುತ್ತಾರೆ ! ಸೀಳಿದ ನಾಲಗೆಯು ಮೊದಲಿನಂತೆ ಸರಿ ಹೋಯಿತು !

ಓರ್ವ ದಂಪತಿಗಳಲ್ಲಿ ಚಿಕ್ಕ ಪುಟ್ಟ ವಿಷಯಗಳಲ್ಲಿ ಮನಸ್ತಾಪ ಉಂಟಾಗಿ ಪತಿಯು ದೂರವಾದನು. ನೂತನ ದಂಪತಿಗಳ ಸಂಸಾರವು ಹೀಗಾಗಲು ಹಿರಿಯರು ಸೂಚಿಸಿದಂತೆ ಆ ಸತೀಮಣಿಯು ಶ್ರೀ ರಘೂತ್ತಮ ತೀರ್ಥರಲ್ಲಿ ಭಕ್ತಿ ನಿಶ್ವಾಸಗಳಿಂದ ಸೇವೆ ಮಾಡಿದಳು. ಗುರುಗಳು ಪ್ರಸನ್ನರಾದರು. ವರ್ಷಗಳ ಹಿಂದೆ ಕಾಣದಾದ ಪತಿಯು, ತಿರುಕೋಯಿಲೂರಿಗೆ ಬಂದು ಗುರುಗಳ ಸನ್ನಿಧಿಯಲ್ಲಿ ಸೇವಾನಿರತಳಾದ ಸತಿಯನ್ನು ಸಂತಸದಿಂದ, ಮಾತನಾಡಿಸಿ, ಆದರದಿಂದ ಸತಿಯನ್ನು ಸ್ವೀಕರಿಸಿ, ಗುರುಗಳಿಗೆ ಹಸ್ತೋದಕಕ್ಕೆ

ಕೊಟ್ಟು, ತೀರ್ಥ ಪ್ರಸಾದಗಳನ್ನು ಸ್ವೀಕರಿಸಿ, ಹೆಂಡತಿಯೊಡನೆ ಸ್ವಗ್ರಾಮಕ್ಕೆ ಹಿಂತಿರುಗಿದನು.

ಲೋಕ ಕಲ್ಯಾಣಾರ್ಥವಾಗಿ, ಮಹಾ ನಗರವಾದ ಕಲ್ಯಾಣ ನಗರದಲ್ಲಿ ಶ್ರೀ ರಘೂತ್ತಮರ ಶಾಖಾ ಬೃಂದಾವನವು ಪ್ರತಿಷ್ಠಿತವಾಗಿರುತ್ತದೆ. ಮಹಾತ್ಮರಾದ ಶ್ರೀ ರಘೂತ್ತಮರು, ಮಂದಮತಿಗಳಿಗೆ ಸದ್ಬುದ್ಧಿಯನ್ನು ದಯಪಾಲಿಸಿ ಮಾನವಜನಾಂಗಕ್ಕೆ ಮಂಗಳವನ್ನುಂಟುಮಾಡಲಿ !

॥ ಶ್ರೀ ಕೃಷ್ಣಾರ್ಪಣಮಸ್ತು ॥

ಗೌರೀಬಿದನೂರು
**29-12-71**

ಜೆ. ಹೆಚ್. ಬಿ. ಆಚಾರ್ಯ

# ಶ್ರೀಮದ್ರಘೂತ್ತಮ ಗುರು ಸ್ತೋತ್ರಮ್

—o—

|| ಶ್ರೀ ಗುರುಭ್ಯೋ ನಮಃ ಹರಿಃ || ಓಂ ||

ಗಂಭೀರಾಶಯ ಗುಂಭ ಸಂಭೃತ ವಚಸ್ಸಂದರ್ಭಗರ್ಭೋಲ್ಲಸ
ಟ್ಟೀಕಾಭಾವವಿಬೋಧನಾಯ ಜಗತಾಂಯಶ್ಯಾವತಾರೋಜನಿ
ತತ್ತಾದೃಕ್ಷದುರಂತಸಂತತ ತಪಸ್ಸಂತಾನ ಸಂತೋಷಿತ
ಶ್ರೀ ಕಾಂತಂಸುಗುಣಂ ರಘೂತ್ತಮ ಗುರುಂ ವಂದೇಪರಂ ದೇಶಿಕಮ್ 1

ಸಚ್ಛಾಸ್ತ್ರಾಮಲಭಾವ ಬೋಧ ಕಿರಣೈಃ ಸಂವರ್ಧಯನ್ ಮಧ್ವ - ಸ
ತ್ಸಿದ್ಧಾಂತಾಬ್ಧಿಮನಂತ ಶಿಷ್ಯ ಕುಮುದ ವ್ರಾತಂ ವಿಕಾಸಂ ನಯನ್
ಉದ್ಭೂತೋರಘುವರ್ಯತೀರ್ಥ ಜಲಧೇಸ್ತಾಪತ್ರಯಂತ್ರಾಸಯನ್
ಯಸ್ತಂ ನೌಮಿ ರಘೂತ್ತಮಾಖ್ಯ ಶಶಿನಂ ಶ್ರೀ ವಿಷ್ಣು ಪಾದಾಶ್ರಯಮ್ 2

ಉದ್ಯನ್ಮಾರ್ತಾಂಡ ಸಂಕಾಶಂ ದಂಡಮಾಲಾ ಕಮಂಡಲೂನ್
ಧರನ್ ಕೌಪೀನ ಸೂತ್ರಂಚ ಸೀತಾರಾಘವ ಮಾನಸಮ್ 3

ಶ್ರೀನಿವಾಸೇನ ವಂದ್ಯಾಂಘ್ರಿಮ್ ತುಲಸೀದಾಮ ಭೂಷಣಮ್
ಧ್ಯಾಯೇದ್ರಘೂತ್ತಮ ಗುರುಂ ಸರ್ವಸೌಖ್ಯಪ್ರದಂ ನೃಣಾಮ್ 4

ರಘೂತ್ತಮ ಗುರುಂ ನೌಮಿ ಶಾಂತ್ಯಾದಿ ಗುಣಮಂಡಿತಮ್
ರಘೂತ್ತಮ ಪದದ್ವಂದ್ವ ಕಂಜ ಭೃಂಗಾಯಿತಾಂತರಮ್ 5

ರಘೂತ್ತಮ ಗುರುಂ ವಂದೇ ರಘೂತ್ತಮ ಪದಾರ್ಚಕಮ್
ಗಾಂಭೀರ್ಯೇಣಾರ್ಥ ಬಾಹುಲ್ಯ ಟೀಕಾತಾತ್ಪರ್ಯ ಬೋಧಕಮ್ 6

ಭಾವಬೋಧ ಕೃತಂ ನೌಮಿ ಭಾವಭಾವಿತ ಭಾವುಕಮ್
ಭಾವ ಭಾಜಂ ಭಾವಜಾದಿ ಪರೀಭಾವ ಪರಾಯಣಮ್ 7

ಸಂನ್ಯಾಯ ವಿವೃತೇಷ್ಟಿಕಾ ಶೇಷಸಂಪೂರ್ಣ ಕಾರಿಣಮ್
ಟೀಕಾಂದೃಷ್ಟ್ವಾ ಪೇಟೆಕಃನಾಂ ನಿಜಯಂಚ ಚಕಾರಯಃ 8

ಪ್ರಮೇಯ ಮಣಿಮಾಲಾನಾಂ ಸ್ಥಾಪನಾಯ ಮಹಾಮತಿಃ
ತಮಾಲಂ ಭಾವ ಬೋಧಾರ್ಥಂ ಭೂಯೋ ಭೂಯೋ ನಮಾಮ್ಯಹಮ್ 9

ಭಾವ ಬೋಧಕೃತಂ ಸೇವೇ ರಘೂತ್ತಮ ಮಹಾಗುರುಂ
ಯಚ್ಚಿಷ್ಯ ಶಿಷ್ಯ ಶಿಷ್ಯಾದ್ಯಾಷ್ಟಿಪ್ಪಣ್ಯಾಚಾರ್ಯ ಸಂಜ್ಞಿತಾಃ 10

ಶುಕೇನ ಶಾಂತ್ಯಾದಿಷು ವಾಜ್ಞಯೇಷುವ್ಯಾಸೇನ ಧೈರ್ಯೇಂಬುಧಿ
ಸೋಪಮೇಯಮ್
ಮನೋಜಜಿತ್ಯಾಂ ಮನಸಾಂಹಿಪತ್ಯಾ ರಘೂತ್ತಮಾಖ್ಯಂ
ಸ್ವಗುರುಂ ನಮಾಮಿ 11

ರಾಮ ರಾಮ ತವ ಪಾದಪಂಕಜಂ ಚಿಂತಯಾಮಿಭವಬಂಧ ಮುಕ್ತಯೇ
ವಂದಿತಂ ಸುರನರೇಂದ್ರ ಮೌಳಿ ಭಿರ್ಧ್ಯಾಯತೇ ಮನಸಿಯೋಗಿಭಿಸ್ಸದಾ 12

ಪಿನಾಕಿನೀ ರಸಂಘುಷ್ಟ ದೇಶೇವಾಸಮನೋರಥಂ
ಪಿನಾಕಿ ಪೂಜ್ಯ ಶ್ರೀ ಮಧ್ವ ಶಾಸ್ತ್ರವಾರ್ಧಿ ನಿಶಾಕರಮ್ 13

ಪಂಚಕೈರ್ಭಾವ ಬೋಧಾಖ್ಯೈಃ ಗ್ರಂಥೈಃ ಪಂಚಕ ಸಂಖ್ಯೈಃ
ತತ್ವ ವಿಜ್ಞಾಪಕೈಃ ಸ್ಯಾನಾ ಮುಪಮೇಯಮ್ ಪಿನಾಕಿನಾ 14

ಗಾಂಭೀರ್ಯೇಗರ್ವದುರ್ವಾದಿ ಗಿರಿಪಕ್ಷವಿದಾರಣೇ
ವಿಷಯೇಷು ವಿರಾಗಿತ್ವೇ ಚೋಪಮೇಯಂ ಪಿನಾಕಿನಾ 15

ಧರಣೇಭಗವನ್ಮೂರ್ತೇರ್ಭರಣೇ ಭಕ್ತ ಸಂತತೇ
ಪಿನಾಕಿನಾ ಚೋಪಮೇಯಂ ಮೇಯಂ ತತ್ವಪ್ರಕಾಶನೇ 16

ಗುರ ತ್ರೀಖಿಲ ಲೋಕಾನಾಂ ಪ್ರದಾನೇಭೀಷ್ಟಸಂತತೇ
ಶಿಷ್ಯೇಭ್ಯಸ್ತತ್ವವಿಜ್ಞಾನ ಪ್ರದಾನೇ ಪರಮಂಗುರುಮ್ 17

ಸದಾರ ರಾಮ ಪಾದಾಬ್ಜ ಸದಾರತಿ ಸುಧಾರಕಂ
ಸದಾರಿಭೇದನೇವಿಷ್ಣು ಗದಾರಿಸದೃಶಂ ಸದಾ 18

ರಘುನಾಥಾಂಘ್ರಿ ಸದ್ಭಕ್ತ್ಯಾ ರಘುನಾಥಾನುಜಾಯಿತಂ
ರಘುನಾಥಾರ್ಯ ಪಾಣ್ಯುತ್ಥ ರಘುವರ್ಯ ಕರೋದಿತಃ 19

ವೇದೇಶಾರ್ಚಿತ ಪಾದಾಬ್ಜಂ ವೇದೇಶಾಂಘ್ರ್ಯಬ್ಜ ಪೂಜಕಂ
ರಘೂತ್ತಮ ಗುರುಂ ವಂದೇ ರಘೂತ್ತಮ ಪದಾರ್ಚಕಮ್ 20

ರಘೂತ್ತಮ ಗುರುಸ್ತೋತ್ರ ಸ್ಯಾಷ್ಟಕಂ ಯಃಪಠೇನ್ನರಃ
ರಘೂತ್ತಮ ಪ್ರಸಾದಾಚ್ಚ ಸಸರ್ವಾಭೀಷ್ಟ ಭಾಗ್ಭವೇತ್ 21

ಯದ್‌ವೃಂದಾವನ ಪೂರ್ವತಃ ಫಲವತೀ ಧಾತ್ರೀಜಗತ್ಪಾವನೀ
ಯಾಮ್ಯಾಯಾಂತು ಪಿನಾಕಿನೀ ಚಲದಳೋಮೂರ್ತಿತ್ರಯಾಧಿಷ್ಟಿತಃ 22

ವಾರುಣ್ಯಾಂದಿಶಿವಾಮತಃ ಪ್ರತಿಕೃತೌ ಭೂಯಾಕೃತಾ ತಿಂತ್ರಿಣೀ
ತದ್ವೃಂದಾವನ ಮಧ್ಯಗೋ ಗುರುವರೋ ಭೂಯಾತ್ಸನ ಶ್ರೇಯಸೇ 23

ಪ್ರಣಮತ್ ಕಾಮಧೇನುಂಚ ಭಜತ್ ಸುರತ ರೂಪಮುಮ್
ಶ್ರೀ ಬಾವಬೋಧಕೃತ್ಪಾದ ಚಿಂತಾಮಣಿ ಮುಪಾಸ್ಮಹೇ 24

ಶ್ರೀ ರಘೂತ್ತಮ ಸ್ತೋತ್ರಂ ಸಂಪೂರ್ಣಮ್

॥ ಶ್ರೀ ಕೃಷ್ಣಾರ್ಪಣಮಸ್ತು ॥

---

## ಇತರ ಕೃತಿಗಳು

| | | ರೂ | ಪೈಸೆ. |
|---|---|---|---|
| 1. | ಶ್ರೀ ರಾಘವೇಂದ್ರ ಚರಿತಾಮೃತಮ್ | 1 | 00 |
| 2. | ಶ್ರೀ ರಾಘವೇಂದ್ರ ಶತಕ | 0 | 50 |
| 3. | ಶ್ರೀ ರಾಘವೇಂದ್ರ ಸುಪ್ರಭಾತಮ್ | 0 | 25 |
| 4. | ಶ್ರೀ ರಾಘವೇಂದ್ರ ನಕ್ಷತ್ರ ಮಾಲಿಕ | 0 | 30 |
| 5. | ಶ್ರೀ ಮಂತ್ರಾಲಯ ಪ್ರಭುಗಳು | 2 | 00 |
| 6. | ಶ್ರೀ ರಾಘವೇಂದ್ರ ಸ್ತೋತ್ರಮ್ (ತಾತ್ಪರ್ಯ ಸಹಿತ) | 0 | 40 |
| 7. | ಶ್ರೀ ನೃಸಿಂಹ ಸ್ತುತಿ | 0 | 30 |
| 8. | ಶ್ರೀ ಶಿವಸ್ತುತಿ | 0 | 20 |

ಪ್ರತಿಗಳಿಗೆ

Sri Gururaja General Agencies
20, III Main Road,
Chamarajpet, Bangalore - 18.